# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಮೊದಲನೇ ಅಧಿವೇಶನ)
(ಮುಂದುವರೆದ ಉಪವೇಶನ)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 25ನೇ ಜುಲೈ, 2013
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಹತ್ತನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಹತ್ತನೇ ಪಟ್ಟಿ

### 2. ಶಾಸನ ರಚನೆ

**ವಿಧೇಯಕಗಳನ್ನು ಮಂಡಿಸುವುದು**

1) **ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕ, 2013**
**ಶ್ರೀ ಸಿದ್ಧರಾಮಯ್ಯ ( ಮುಖ್ಯಮಂತ್ರಿಯವರು) ಅವರು:-**

ಅ) 2013ನೇ ಸಾಲಿನ ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು:
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

2) **ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕ, 2013**
**ಶ್ರೀ ವಿನಯಕುಮಾರ್ ಸೊರಕೆ ( ನಗರಾಭಿವೃದ್ಧಿ ಸಚಿವರು) ಅವರು:-**

ಅ) 2013ನೇ ಸಾಲಿನ ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು:
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

### 3. ವಿತ್ತೀಯ ಕಾರ್ಯಕಲಾಪಗಳು

2013-14ನೇ ಸಾಲಿನ ಪರಿಷ್ಕೃತ ಆಯವ್ಯಯ ಅಂದಾಜುಗಳ ಮೇಲೆ ಮುಂದುವರೆದ ಸಾಮಾನ್ಯ ಚರ್ಚೆ ಹಾಗೂ ಬೇಡಿಕೆಗಳ ಮೇಲಿನ ಚರ್ಚೆ.

| ಬೇಡಿಕೆ ಸಂಖ್ಯೆ | ಬೇಡಿಕೆಗಳ ಹೆಸರು |
|---|---|
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 24 | ಇಂಧನ |

ಪು.ತಿ.ನೋ.,

| | |
|---|---|
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವೆಗಳು |
| 17 | ಶಿಕ್ಷಣ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ |
| 14 | ಕಂದಾಯ |
| 20 | ಲೋಕೋಪಯೋಗಿ |
| 05 | ಒಳಾಡಳಿತ ಮತ್ತು ಸಾರಿಗೆ |
| 09 | ಸಹಕಾರ |
| 16 | ವಸತಿ |
| 19 | ನಗರಾಭಿವೃದ್ಧಿ |
| 21 | ಜಲಸಂಪನ್ಮೂಲ |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| 10 | ಸಮಾಜ ಕಲ್ಯಾಣ |
| 15 | ಮಾಹಿತಿ ತಂತ್ರಜ್ಞಾನ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 01 | ಕೃಷಿ ಮತ್ತು ತೋಟಗಾರಿಕೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 25 | ಕನ್ನಡ ಮತ್ತು ಸಂಸ್ಕೃತಿ |
| 23 | ಕಾರ್ಮಿಕ |

## 4. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಹೆಚ್.ಸಿ. ಬಾಲಕೃಷ್ಣ ಅವರು ರಾಮನಗರ ತಾಲ್ಲೂಕು ಬಿಡದಿ ಬಳಿ ಉದ್ದೇಶಿತ ಟೌನ್‌ಷಿಪ್‌ನ್ನು ಮಾಡದಿರುವುದರಿಂದ ರೈತರಿಗೆ ಉಂಟಾಗಿರುವ ತೊಂದರೆ ಬಗ್ಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

2. ಶ್ರೀಯುತರುಗಳಾದ ಬಿ.ಆರ್. ಪಾಟೀಲ್, ಶಾರದಾ ಪೂರ್ಯ ನಾಯಕ, ಶಕುಂತಲಾ ಟಿ. ಶೆಟ್ಟಿ, ಎನ್.ಹೆಚ್. ಕೋನರೆಡ್ಡಿ, ಯು.ಬಿ. ಬಣಕಾರ್ ಹಾಗೂ ಇತರರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಬಡ ಕುಟುಂಬದ ಮಹಿಳೆಯರಿಗೆ ಶೌಚಾಲಯ ಇಲ್ಲದೇ ತೊಂದರೆಯಾಗಿರುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

3. ಶ್ರೀ ವಸಂತ ಬಂಗೇರಾ ಅವರು ಬೆಳ್ತಂಗಡಿ ತಾಲ್ಲೂಕಿನಲ್ಲಿ ಅಪರಿಚಿತರು ಕೆಲವು ಪಡಿತರ ಚೀಟಿದಾರರ ಕ್ರಮಸಂಖ್ಯೆಯನ್ನು ಉಪಯೋಗಿಸಿಕೊಂಡು ಅಡಿಗೆ ಅನಿಲ ಸಂಪರ್ಕವನ್ನು ಪಡೆದಿರುವ ಬಗ್ಗೆ ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

4.ಶ್ರೀ ಶಿವಾನಂದ ಎಸ್. ಪಾಟೀಲ್ ಅವರು ರಾಜ್ಯದಲ್ಲಿರುವ ರಸ್ತೆಗಳು ಹದಗೆಟ್ಟಿರುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

5. ಡಾ॥ ಕೆ. ಸುಧಾಕರ ಅವರು ನಗರದ ಹೆನ್ನೂರು ಬಳಿ ಆಫ್ರಿಕಾ ಮೂಲದ ಸಾಫ್ಟ್‌ವೇರ್ ಇಂಜಿನೀಯರೊಬ್ಬರು ಹಲ್ಲೆಗೊಳಗಾಗಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

6. ಶ್ರೀ ಕೆ.ಎಂ. ಶಿವಲಿಂಗೇಗೌಡ ಅವರು ರೈತರಿಗೆ ಕೃಷಿ ಇಲಾಖೆ ಮುಖಾಂತರ ಬಿತ್ತನೆ ಬೀಜ ವಿತರಿಸುವಾಗ ಹೆಚ್ಚಿನ ಹಣ ವಸೂಲಿ ಮಾಡುತ್ತಿರುವ ಬಗ್ಗೆ ಮಾನ್ಯ ಕೃಷಿ ಸಚಿವರ ಗಮನ ಸೆಳೆಯುವುದು.

7. ಶ್ರೀ ಇ.ತುಕಾರಾಂ ಅವರು ತುಂಗಾಭದ್ರ ಜಲಾಶಯದಿಂದ ಸಂಡೂರು ಪುರಸಭೆ ವ್ಯಾಪ್ತಿಯ ಪ್ರದೇಶಗಳಿಗೆ ಶುದ್ಧ ಕುಡಿಯುವ ನೀರಿನ ಯೋಜನೆಯ ಕಾಮಗಾರಿ ಅನುಷ್ಠಾನಗೊಳ್ಳದಿರುವ ಬಗ್ಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

8. ಶ್ರೀ ಜೆ.ಆರ್. ಲೋಬೋ ಅವರು ಕುದುರೆಮುಖ ಕಬ್ಬಿಣದ ಅದಿರು ಕಂಪನಿಯನ್ನು ಮುಚ್ಚುವುದರಿಂದ ತೊಂದರೆ ಉಂಟಾಗುತ್ತಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯವುದು.

9. ಶ್ರೀ ಹೆಚ್. ಡಿ. ರೇವಣ್ಣ ಅವರು ರಾಜ್ಯ ಹೆದ್ದಾರಿಗಳಲ್ಲಿ ರೈಲ್ವೆ ಇಲಾಖೆಯು ನಿರ್ಮಿಸುತ್ತಿರುವ ಮೇಲು ಸೇತುವೆಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರಕ್ಕೆ ಕಾಸ್ಟ್ ಷೇರಿಂಗ್‌ಗಾಗಿ ಸಲ್ಲಿಸಿರುವ ಕೋರಿಕೆಯ ಕುರಿತು ಸರ್ಕಾರ ಕೈಗೊಂಡ ಕ್ರಮದ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

10. ಶ್ರೀ ಜಿ.ಹೆಚ್. ಶ್ರೀನಿವಾಸ ಅವರು ರಾಜ್ಯದಲ್ಲಿನ ತಾಲ್ಲೂಕು ಪಂಚಾಯಿತಿಗಳಲ್ಲಿ ಪ್ರಭಾರ ಕಾರ್ಯನಿರ್ವಹಣಾಧಿಕಾರಿಗಳನ್ನು ಮಾತೃ ಇಲಾಖೆ ವಾಪಸ್ಸು ಕಳುಹಿಸಿ ಅನುಭವಿ ಅಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

11. ಶ್ರೀ ವಿ. ಸುನೀಲ್ ಕುಮಾರ್ ಅವರು ರಾಜೀವ್ ಗಾಂಧಿ ವಿದ್ಯುಧೀಕರಣ ಯೋಜನೆಯ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

ಪು.ತಿ.ನೋ.,

## 5. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಮಧು ಬಂಗಾರಪ್ಪ, ಬಿ.ಬಿ.ನಿಂಗಯ್ಯ, ಎಂ.ಟಿ. ಕೃಷ್ಣಪ್ಪ, ಕೆ.ಎಂ.ಶಿವಲಿಂಗೇಗೌಡ ಅವರುಗಳು ರಾಜ್ಯದ ಅರಣ್ಯ ಜಮೀನುಗಳಲ್ಲಿ ಸಾಗುವಳಿ ಮಾಡುತ್ತಿರುವ ರೈತರಿಗೆ ಜಮೀನನ್ನು ಮಂಜೂರು ಮಾಡಲು ಪರಿಶಿಷ್ಟ ಜಾತಿ ವರ್ಗದವರ ಪಾರಂಪರಿಕ ಅರಣ್ಯ ಹಕ್ಕು 2006ರ ಕಾಯ್ದೆಗೆ ತಿದ್ದುಪಡಿ ತರಲು ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಒತ್ತಾಯಿಸುವ ಬಗ್ಗೆ ಚರ್ಚೆ.

2. ಶ್ರೀಯುತರುಗಳಾದ ಹೆಚ್.ಡಿ. ಕುಮಾರಸ್ವಾಮಿ, ಜಿ.ಟಿ. ದೇವೇಗೌಡ, ಕೆ.ಎಂ.ಶಿವಲಿಂಗೇಗೌಡ, ಎಂ.ಟಿ. ಕೃಷ್ಣಪ್ಪ, ಡಿ. ನಾಗರಾಜಯ್ಯ ಹಾಗೂ ಇತರರು ರಾಜ್ಯದ ಮಲೆನಾಡು ಭಾಗದಲ್ಲಿ ಏಲಕ್ಕಿ ಬೆಳೆಯು ಕಕ್ಕೆಕಂದು ರೋಗಕ್ಕೆ ತುತ್ತಾಗಿ ಬೆಳೆಯು ನಾಶವಾಗಿರುವುದರಿಂದ ಏಲಕ್ಕಿ ಬೆಳೆಗಾರರಿಗೆ ತೊಂದರೆಯುಂಟಾಗಿರುವ ಬಗ್ಗೆ ಚರ್ಚೆ.

## 6. ಅರ್ಧ ಗಂಟೆ ಕಾಲಾವಧಿ ಚರ್ಚೆ

1. ಶ್ರೀ ಹೆಚ್.ಡಿ. ರೇವಣ್ಣ ಅವರು "ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಕಾರ್ಯವೈಖರಿ" ಬಗ್ಗೆ ದಿನಾಂಕ: 17.07.2013 ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 4ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 48 (266)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

2. ಶ್ರೀ ಸಿ.ಟಿ. ರವಿ ಅವರು "ಹಾಲಿನ ವಿವರ ಹಾಗೂ ಸರಬರಾಜು" ಬಗ್ಗೆ ದಿನಾಂಕ: 19.07.2013ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 6ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 85(400)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

3. ಶ್ರೀ ಎಸ್. ಮುನಿರಾಜು ಅವರು "ಅಬ್ಬಿಗೆರೆ ಗ್ರಾಮದ ಸರ್ವೆ ನಂ.13ರ ಸರ್ಕಾರಿ ಜಮೀನು ಇವುಗಳ" ಬಗ್ಗೆ ದಿನಾಂಕ: 22.07.2013ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 7ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 92(792)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

4. ಶ್ರೀ ಕೆ.ಎಂ.ಶಿವಲಿಂಗೇಗೌಡ ಅವರು "ಕೆ.ಐ.ಎ.ಡಿ.ಬಿ ಇಲಾಖೆಯಿಂದ ಜಮೀನು ನೀಡುವುದು" ಬಗ್ಗೆ ದಿನಾಂಕ: 23.07.2013ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 8ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 106(1043)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

ಪು.ತಿ.ನೋ.,

5. ಶ್ರೀ ಪ್ರತಾಪಗೌಡ ಪಾಟೀಲ್ ಅವರು "ಮನೆಗಳ ನಿರ್ಮಾಣದಲ್ಲಿ ಅಳತೆಯ ನಿರ್ಬಂಧ" ಬಗ್ಗೆ ದಿನಾಂಕ: 24.07.2013ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 9ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 134(690)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

## 7. ಖಾಸಗಿ ಸದಸ್ಯರ ಕಾರ್ಯಕಲಾಪಗಳು

***ಶ್ರೀ ಹೆಚ್.ಕೆ. ಕುಮಾರಸ್ವಾಮಿ ಹಾಗೂ ಬಿ.ಬಿ.ನಿಂಗಯ್ಯ ಅವರುಗಳು ಈ ಕೆಳಕಂಡ ನಿರ್ಣಯವನ್ನು ಮಂಡಿಸುವುದು.***

"2008ರಲ್ಲಿ ವಿಧಾನಸಭಾ ಕ್ಷೇತ್ರಗಳ ಪುನರ್‌ವಿಂಗಡಣೆಯನ್ನು ಮಾಡುವಾಗ ಭೌಗೋಳಿಕ ವಿಸ್ತೀರ್ಣ ಮತ್ತು ಪ್ರದೇಶಾವಾರು ಸಮಸ್ಯೆಗಳನ್ನು ಪರಿಗಣಿಸದೆ ಜನಸಂಖ್ಯೆಯ ಆಧಾರದ ಮೇಲೆ ಪುನರ್‌ವಿಂಗಡಣೆಯನ್ನು ಮಾಡಲಾಗಿದ್ದು, ಸರ್ಕಾರದಿಂದ ಅನುದಾನವು ಬಿಡುಗಡೆಯಾಗುವಾಗ ಜನಸಂಖ್ಯೆ ಆಧಾರದ ಮೇಲೆ ಬಿಡುಗಡೆಯಾಗಿರುವುದರಿಂದ ಭೌಗೋಳಿಕವಾಗಿ ಹೆಚ್ಚು ವಿಸ್ತೀರ್ಣವುಳ್ಳ ಮತ್ತು ವಿವಿಧ ರೀತಿಯ ಸಮಸ್ಯೆಗಳಿರುವ ಕ್ಷೇತ್ರಗಳ ಅಭಿವೃದ್ಧಿಗೆ ಇದರಿಂದ ಹಿನ್ನಡೆಯುಂಟಾಗುತ್ತಿದ್ದು ಜನಸಂಖ್ಯೆಯನ್ನು ಆಧಾರವಾಗಿಟ್ಟುಕೊಳ್ಳದೇ ಭೌಗೋಳಿಕ ವಿಸ್ತೀರ್ಣ ಮತ್ತು ಸಮಸ್ಯೆಗಳಿಗನುಗುಣವಾಗಿ ಕ್ಷೇತ್ರಗಳಿಗೆ ಅನುದಾನ ಬಿಡುಗಡೆ ಮಾಡಬೇಕೆಂದು ಅದರಲ್ಲೂ ವಿಶೇಷವಾಗಿ ಭೌಗೋಳಿಕವಾಗಿ ಹೆಚ್ಚು ಸಮಸ್ಯೆ ಇರುವ ಮಲೆನಾಡು ಭಾಗಗಳಿಗೆ ಅಗತ್ಯವಾದ ಅನುದಾನಗಳನ್ನು ಬಿಡುಗಡೆ ಮಾಡಬೇಕೆಂದು ಸದನವು ಸರ್ಕಾರವನ್ನು ಒತ್ತಾಯಿಸುತ್ತದೆ."

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
(www.kar.nic.in/kla)